# 181

# ಜಯಸಿಂಹ ವಿಜಯ

ಮತ್ತು

# ಜಯಸಿಂಹ ಚರಿತೆ

(ಯಕ್ಷಗಾನ ಪದ್ಯವೂ ಕತೆಯೂ)


ಕವಿ:

ದಿವಂಗತ ಮೈಪಾಡಿ ವೆಂಕಟರಮಣಯ್ಯ.

ಸಂಗ್ರಾಹಕರು:

ಕೆ. ವೆಂಕಟರಾಯಾಚಾರ್ಯ, ವಿದ್ವಾನ್,

ಸುರತ್ಕಲ್ಲು



1958.






ಒಂದಾಣೆ ಮಾಲೆ

## ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1958ನೇ ಎಪ್ರಿಲ್ ತಿಂಗಳ ಮೊದಲನೆಯ ವಾರದ ವರೆಗೆ 181 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

181 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 3758 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಮೊದಲ ನುಡಿಗಳು

'ಜಯಸಿಂಹ ಚರಿತೆ' ಅಥವಾ 'ಜಯಸಿಂಹ ವಿಜಯ'ವೆಂಬೀ ಯಕ್ಷಗಾನ ಕೃತಿಯಲ್ಲಿ ಕುಂಬಳೆ ಸೀಮೆಯ ಅರಸನಾದ ಜಯಸಿಂಹನ ಕಥೆಯು ಒಳಗೊಂಡಿದೆ. ದಕ್ಷಿಣ ಕನ್ನಡ ಜಿಲ್ಲೆಯ ತೆಂಕು ತುದಿಯ ಕುಂಬಳೆ ಸೀಮೆಯಿಂದ ಬಡಗು ಬಾರ್ಕೂರು ತನಕ 'ತುಳುನಾಡು' ಎಂದು ಪೂರ್ವದಿಂದಲೂ ಪ್ರಸಿದ್ಧವಾಗಿದೆ. ಕುಂಬಳೆ ಸೀಮೆಯಲ್ಲಿ ಜಯಸಿಂಹನು ಆಳಿದ್ದನೆಂದು ಶ್ರೀ। ಎಂ. ಗಣಪತಿರಾವ್ ಐಗಳ್, ಶ್ರೀ। ಎಂ. ಗೋವಿಂದ ಪೈ, ಶ್ರೀ। ರಾಜಪುರೋಹಿತ ಮೊದಲಾದವರ ಗ್ರಂಥಗಳಲ್ಲಿ ತಿಳಿದುಬರುತ್ತದೆ. ಈ ಸಂಗತಿಯೊಂದಿಗೆ ಜನರ ಆಡುಮಾತಿನಲ್ಲಿ ಬಳಕೆಯಿರುವ ಮೊಗರ, ಬಡಬರ ಕತೆಯೂ ಇಲ್ಲಿ ಸೇರಿದೆ.

"ಈ ಚಿಕ್ಕ ಐತಿಹಾಸಿಕ ಪ್ರಬಂಧವು ತುಳುನಾಡಿನಲ್ಲಿ ಆಳಿದ ಕದಂಬ ರಾಜರ ಕಥೆಯೊಂದರ ಆಧಾರದ ಮೇಲೆ ಬರೆದುದಾಗಿದೆ. ಬಾಲಕರಿಗೆ ಚರಿತ್ರೆಯ ಪಾಠದಲ್ಲಿ ನವಚೇತನವನ್ನು ಹುಟ್ಟಿಸುವುದೇ ಈ ಕಾರ್ಯದ ಉದ್ದೇಶ"ವೆಂದು ಇದರ ಕರ್ತೃಗಳಾದ್ದ ಶ್ರೀ। ಮೈಪಾಡಿ ವೆಂಕಟರಮಣಯ್ಯನವರು ಬರೆದಿದ್ದಾರೆ. ಇಲ್ಲಿ ಚರಿತ್ರೆ ಹಾಗೂ ಯಕ್ಷಗಾನ ಕೃತಿ ಇವೆರಡೂ ಇವೆ.

ಶ್ರೀಯುತರು ಇಸ್ವಿ 1894-1926ರಲ್ಲಿ ಬಾಳಿದ್ದರು. ಇವರು ಶ್ರೀ। ಪಾವಂಜೆ ಗೋಪಾಲಕೃಷ್ಣಯ್ಯನವರಲ್ಲಿ ಚಿತ್ರಕಲೆಯನ್ನು ವಿಶೇಷವಾಗಿ ಅಭ್ಯಾಸಮಾಡಿದ್ದರು. ಶ್ರೀ। ಪಂಜೆ ಮಂಗೇಶರಾಯರ ಆಪ್ತಶಿಷ್ಯರಲ್ಲಿ ಒಬ್ಬರಾಗಿದ್ದರು. ಸುರತ್ಕಲ್ಲಿನಲ್ಲಿ ಇದ್ದ ವಿದ್ಯಾದಾಯಿನೀ ಶಾಲೆಯು ಇಸ್ವಿ 1916ರಲ್ಲಿ ಸ್ಥಾಪಿತವಾಗಲು ಕಾರಣರಾದ ವ್ಯಕ್ತಿಗಳಲ್ಲೊಬ್ಬರು ಇವರಾಗಿದ್ದರು. 'ಅದ್ಭುತ ಕೌಶಲ' ಅಥವಾ 'ಪ್ರತಾಪಚಂದ್ರ ಚರಿತ್ರೆ'ಯೆಂಬ ನಾಲ್ಕು ಅಂಕಗಳ ನವೀನ ಕಾಲ್ಪನಿಕ ರೂಪಕವನ್ನೂ ಇವರು ರಚಿಸಿದ್ದರು. ಈ ಯಕ್ಷಗಾನ ಕೃತಿಯು ಇಸ್ವಿ 1925ರ ಫೆಬ್ರವರಿಯಲ್ಲಿ ಮಂಗಳೂರು ಪ್ರಾಥಮಿಕ ಶಿಕ್ಷಕರ ತರಬೇತಿ ಶಾಲೆಯ ಶೈಕ್ಷಣಿಕ ಪ್ರದರ್ಶನದಲ್ಲಿ ಇವರ ಶಾಲಾ ಬಾಲಕರಿಂದ ಅಭಿನಯಿಸಲ್ಪಟ್ಟಿದೆಯೆಂದು ಕೇಳುತ್ತೇವೆ. ಇದರ ಹಸ್ತಪ್ರತಿಯನ್ನು ಒದಗಿಸಿ, ಪ್ರಕಟಿಸಲು ನೆರವಿತ್ತ ಇವರ ಸೋದರ ಶ್ರೀ। ಎಂ. ವಾಸುದೇವರಾವ್ (ವಿದ್ಯಾದಾಯಿನಿ ಹೈಸ್ಕೂಲಿನ ಮುಖ್ಯಾಧ್ಯಾಪಕರು) ಇವರಿಗೆ ನಾನು ಕೃತಜ್ಞನಾಗಿದ್ದೇನೆ.

ಸುರತ್ಕಲ್ಲು,<br>ತಾ. 16—3—58. } —ಕೆ. ವೆಂಕಟರಾಯಾಚಾರ್ಯ.

---

# ಜಯಸಿಂಹನ ಚರಿತೆ.

---

ನಮ್ಮ ಕರ್ಣಾಟಕ ದೇಶವನ್ನು ಇಂಗ್ಲಿಷರು ರಾಜ್ಯಭಾರ ನಡೆಯಿಸು ವುದಕ್ಕೆ ಮೊದಲು ಅನೇಕ ಹಿಂದೂರಾಜರು ಆಳುತ್ತಿದ್ದರು. ಹಾಗೆ ಆಳಿದ ಅರಸರಲ್ಲಿ "ಕಾಮದೇವ"ನೆಂಬ ರಾಜನು ಬಹಳ ಪ್ರಸಿದ್ಧನು. ಈತಗೆ ಕಾವ ದೇವನೆಂತಲೂ ಕಂಕಾಕಾರನೆಂತಲೂ ಹೆಸರುಂಟು. ಇವನ ಮೂಲಪುರು ಷನ ಹೆಸರು "ಜಯಸಿಂಹ." ಈ ವಂಶದ ರಾಜರಿಗೆಲ್ಲಾ ಗುರುತಿಗಾಗಿ ಧ್ವಜದಲ್ಲಿ ಹನುಮಂತನ ಚಿತ್ರವೂ, ಕಿರೀಟದಲ್ಲಿ ಲಾಂಛನವೂ (?) ಇತ್ತು. ಇವನು ಧಾರವಾಡ ಜಿಲ್ಲೆಯ ಮಂಗಳ ಇಲ್ಲವೆ ಹಂಗಳ ತಾಲೂಕಿನ ಪನುಮ ಗಳ ಇಲ್ಲವೆ ಹನುಮಗಳ ಎಂಬ ಊರನ್ನು ತನ್ನ ಮುಖ್ಯ ರಾಜಧಾನಿಯಾಗಿ ಇಟ್ಟುಕೊಂಡಿದ್ದನು. ಈ ರಾಜನ ಕುಲದೇವರು ಬನವಾಸಿಯ ಮಧು ಕೇಶ್ವರ. ಇವನು ತನ್ನ ವಂಶದ ರಾಜರಲ್ಲಿ 21ನೇ ರಾಜನು. ಇವನು ಮೊದಲು ಚಾಲುಕ್ಯರ ಕೈಕೆಳಗೆ ಮಂಡಲೇಶ್ವರನಾಗಿದ್ದನು. ಕ್ರಿ.ಶ.1189 ರಲ್ಲಿ ಈತನು ತುಳುದೇಶದಲ್ಲಿ ಆದ ಬಂಟರ ದಂಗೆಯನ್ನು ಅಣಗಿಸಿ ಕನ್ಯಾ ಕುಮಾರಿ ವರೆಗೆ ತೀರ್ಥಯಾತ್ರೆಗೆಂದು ಹೊರಟನು. ಇವನು ಬನವಾಸಿಯ 12 ಸಾವಿರ ಸೀಮೆಗಳನ್ನೂ, ಹನುಮಗಳದ 500 ಸೀಮೆಗಳನ್ನೂ, ಲಕ್ಷ್ಮೀ ಶ್ವರಪುರದ 300 ಸೀಮೆಗಳನ್ನೂ ಆಳುತ್ತಿದ್ದನು.

ಕ್ರಿ.ಶ. 1178ರಲ್ಲಿ "ಒದ್ದಾದಾಸ ಪಾಂಡ್ಯ"ನೆಂಬವನು ತನ್ನ ನಾಡಿ ನವರೊಡಗೂಡಿ ಬಾರಕೂರ ರಾಜರೊಡನೆ ಯುದ್ಧಮಾಡಿ ಸೋಲಿಸಿ ಬಾರ ಕೂರನ್ನು ಹಿಡಿದನು. ಈ ಸಂಗತಿಯು ಕಾಮದೇವಗೆ ತಿಳಿದು, ಒಡನೆ ಸಸೈನ್ಯನಾಗಿ ಬಂದು "ಒದ್ದಾ ಪಾಂಡ್ಯ"ನನ್ನು ಓಡಿಸಿ ಮೊದಲಿನ ಅರಸಗೆ ರಾಜ್ಯವನ್ನು ಕೊಡಿಸಿದನು.

ಅನಂತರ ಕ್ರಿ. ಶ. 1196ರಲ್ಲಿ ಹೊಯಿಸಳರ ಅರಸನಾದ ವೀರಬಲ್ಲಾ ಳನು ಹಂಗಳದ ಆನೆಕೆರೆಯ ಹತ್ತಿರ ತನ್ನ ಸೈನ್ಯವನ್ನು ನಿಲ್ಲಿಸಿ ಕಾಮದೇವನ ಕೋಟೆಗೆ ಮುತ್ತಿಗೆ ಹಾಕಿದನು. ಕೂಡಲೇ ಮಹತ್ ಪ್ರಸಿದ್ಧನಾದ "ಸೋಹಾನಿ" ಎಂಬ ಕಾಮದೇವನ ಸೈನ್ಯಾಧಿಪತಿಯು ಆತನನ್ನು ಯುದ್ಧ ದಲ್ಲಿ ಸೋಲಿಸಿ ಹಿಂದಕ್ಕಟ್ಟಿದನು. ಅಂದಿನಿಂದ ವೀರ ಬಲ್ಲಾಳನು ಕಾಮ

ದೇವನೊಡನೆ ಆಗಾಗ ಯುದ್ಧಮಾಡುತ್ತಲೇ ಇದ್ದು, ಕ್ರಿ. ಶ. 1203ರಲ್ಲಿ ವೀರ ಬಲ್ಲಾಳನನ್ನು ಸಂಪೂರ್ಣವಾಗಿ ಸೋಲಿಸಿ, ಅವನ ರಾಜ್ಯವನ್ನು ತನ್ನ ರಾಜ್ಯಕ್ಕೆ ಕೂಡಿಸಿಕೊಂಡನು.

ಕಾಮದೇವ ಅರಸನು ತನ್ನ ರಾಜ್ಯವನ್ನು ಸಂದರ್ಶಿಸುತ್ತಾ, ತನ್ನೊಳಗಿನ ಮಾಂಡಲಿಕ ಅರಸರಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸುತ್ತಾ ತೀರ್ಥ ಯಾತ್ರೆಗಾಗಿ ಕನ್ಯಾಕುಮಾರಿ ವರೆಗೆ ಹೋಗಿ, ಹಿಂದಿರುಗಿ ಬರುವಾಗ ದಕ್ಷಿಣ ಕನ್ನಡದ ಕುಂಬಳೆಗೆ ಬಂದು, ಕುಂಬಳಕೆರೆಯಲ್ಲಿ ಸ್ನಾನಮಾಡುವಾಗ ಆತನ ಪ್ರೀತಿಯ ಪುತ್ರಿಯಾದ "ಸುಶೀಲೆ"ಯೆಂಬ ಕನ್ನಿಕೆಯು ಗಂಧರ್ವ ಪೀಡೆಯಿಂದ ಮೂರ್ಛಾಕ್ರಾಂತಳಾಗಿ ಬಿದ್ದುಬಿಟ್ಟಳು. ರಾಜನು ಬಹಳ ವ್ಯಸನಿಸುತ್ತಿರಲು ಆಗ್ಗೆ ಅದೇ ಕೆರೆಯಲ್ಲಿ ಸ್ನಾನಕ್ಕಾಗಿ ಬಂದ ಒಬ್ಬ ಬ್ರಾಹ್ಮಣನು ಇದನ್ನು ಕಂಡು, ಒಡನೆಯೇ ತನ್ನ ಮಂತ್ರಪ್ರಭಾವದಿಂದ ಆ ರಾಜಕುವರಿಯನ್ನು ಸೌಖ್ಯಗೊಳಿಸಿದನು.

ಕಾಮರಾಜನು ಬ್ರಾಹ್ಮಣನ ಈ ಮಹತ್ಕಾರ್ಯಕ್ಕೆ ಮೆಚ್ಚಿ ತನ್ನ ಕುವರಿಯಾದ ಸುಶೀಲೆಯನ್ನು ಆ ಬ್ರಾಹ್ಮಣನಿಗೆ ಮದುವೆಮಾಡಿಕೊಟ್ಟದ್ದಲ್ಲದೆ, ಉತ್ತರ ನೇತ್ರಾವತೀ ನದಿ, ಪೂರ್ವ ಪಶ್ಚಿಮ ಘಟ್ಟ, ದಕ್ಷಿಣ ಪಯಸ್ವಿನೀ ನದಿ, ಪಶ್ಚಿಮ ಅರಬಿ ಸಮುದ್ರ ಈ ಗಡಿಯೊಳಗಣ ವಿಸ್ತಾರವಾದ ರಾಜ್ಯವನ್ನೂ ಕೊಟ್ಟು, ಕಾಮದೇವ ಅರಸನು ಪತ್ನೀಸಮೇತ ಹಂಗಳಕ್ಕೆ ತೆರಳಿದನು.

ಇತ್ತ ಬ್ರಾಹ್ಮಣಪತ್ನಿಯಾದ ಸುಶೀಲೆಯು ಸ್ವಲ್ಪ ಸಮಯದಲ್ಲಿ ಗರ್ಭ ಧರಿಸಿ ದಶಮಾಸಭರಿತವಾಗಲು, ರಾಜಯೋಗವುಳ್ಳ ಒಂದು ಗಂಡು ಶಿಶುವನ್ನು ಹೆತ್ತಳು. ಆ ಮಗುವಿಗೆ ಕದಂಬ ವಂಶದ ಮೂಲಪುರುಷನಾದ "ಜಯಸಿಂಹ"ನೆಂಬ ಹೆಸರನ್ನಿಟ್ಟನು. ಜಯಸಿಂಹನು ಶುಕ್ಲಪಕ್ಷದ ಚಂದ್ರನಂತೆ ದಿನದಿಂದ ದಿನಕ್ಕೆ ಬೆಳೆಯುತ್ತಾ, ಪ್ರಾಯಭರಿತನಾದೊಡನೆ ರಾಜ್ಯವನ್ನಾಳತೊಡಗಿದನು.

ಚಿಕ್ಕ ಪ್ರಾಯದ ಜಯಸಿಂಹನು ರಾಜ್ಯವಾಳುವನೆಂಬ ವರ್ತಮಾನ ಕೇಳಿ, ಈತನನ್ನು ಜಯಿಸಿ ರಾಜ್ಯವನ್ನು ಸ್ವಾಧೀನಪಡಿಸಬೇಕೆಂಬ ಇಚ್ಛೆಯಿಂದ ಮಧುರೆಯ ಪಾಂಡ್ಯರಾಜನು ಕೇರಳ ದೇಶವನ್ನು ಗೆದ್ದು ಚಂದ್ರಗಿರಿ ಕೋಟೆಯ ಸಮೀಪ ಬಂದು ನಿಂತನು. ಒಡನೆಯೆ ಪರಾಕ್ರಮಿಯೂ

ಯುವಕನೂ ಯುದ್ಧಾತುರನೂ ಆದ ಜಯಸಿಂಹನು ಯುದ್ಧದಲ್ಲಿ ಆತನನ್ನು ಪರಾಜಿತನನ್ನಾಗಿ ಮಾಡಿದ್ದಲ್ಲದೆ, ಆತನ ಸೇನಾಧಿಪತಿಯನ್ನು ಸೆರೆಹಿಡಿದು ತಂದು ತಾಯಿಯಾದ ಸುಶೀಲೆಗೆ ಒಪ್ಪಿಸಿದನು. ದಯಾನ್ವಿತೆಯಾದ ಸುಶೀಲೆಯು ಮಗನ ಸಿಟ್ಟನ್ನು ಶಾಂತಗೊಳಿಸಿ, ಸೇನಾಧಿಪತಿಯನ್ನು ಮರ್ಯಾದೆ ಪೂರ್ವಕ ಕಳುಹಿಸಿದಳು.

ತರುವಾಯ ಸ್ವಲ್ಪ ಸಮಯದಲ್ಲಿ ಸುಬ್ರಹ್ಮಣ್ಯ ಸಮೀಪವಿರುವ ತನ್ನ ಪ್ರಜೆಗಳು ಕಾಡುಮೃಗಗಳ ಬಾಧೆಯನ್ನು ಸಹಿಸಲಾರದೆ, 'ಅವುಗಳನ್ನು ಸಂಹರಿಸಿ ತಮ್ಮ ಕಷ್ಟಗಳನ್ನು ಪರಿಹರಿಸಬೇಕಾ'ಗಿ ಜಯಸಿಂಹನೊಡನೆ ಮೊರೆಯಿಡಲು, ಒಡನೆಯೇ ಬೇಟೆಗಾರರ ಸಮೇತ ಮೃಗಬೇಟೆಗೆ ಕಾಡಿಗೆ ಹೊರಟನು. ಕಾಡಿನ ಅನೇಕ ದುಷ್ಟಮೃಗಗಳನ್ನು ಸಂಹರಿಸುತ್ತಾ ಬರಲು, ಅಷ್ಟರಲ್ಲೇ ದೊರೆತ ಒಂದಾನೊಂದು ಕಾಡುಹಂದಿಗೆ ಗುರಿ ಇಟ್ಟು ಹೊಡೆಯಲು, ರಾಜನ ದುರದೃಷ್ಟದಿಂದ ಆ ಬಾಣವು ಆ ಹಂದಿಗೆ ತಗಲದೆ, ಅಲ್ಲೇ ಸಮೀಪ ಕಾಡಿನಲ್ಲಿ ತಪೋನಿರತನಾದ ಉದ್ದಾಲಕನೆಂಬ ಬ್ರಾಹ್ಮಣನಿಗೆ ತಗಲಿ, ಒಡನೆಯೆ ಮೃತನಾದನು. ಆ ಋಷಿಪತ್ನಿಯು ಮೃತನಾದ ತನ್ನ ಪತಿಯನ್ನು ಕಂಡು ದುಃಖಿತೆಯಾಗಿ ಪತಿವಿಯೋಗದಿಂದ ರೋಷಾನ್ವಿತೆಯಾಗಿ "ಎಲೇ ರಾಜನೇ! ನೀನು ರಾಜ್ಯಭ್ರಷ್ಟನಾಗು" ಎಂದು ಶಪಿಸಿ, ಪತಿಯೊಡನೆ ಚಿತೆಯನ್ನು ಸೇರಿದಳು.

ಅರಸನು ಈ ಘಟನಾವಳಿಗಳನ್ನು ಕಂಡು ಕಡುದುಃಖಿತನಾಗಿ ಮೃತದೇಹಿಗಳಿಗೆ ಉತ್ತರ ಕ್ರಿಯಾದಿಗಳನ್ನು ಮಾಡಿದನು. ಶಾಪಗ್ರಸ್ತನಾದ ರಾಜನು ರಾಜ್ಯವಾಳುವ ಆಶೆಯನ್ನು ತೊರೆದು, ಶಾಪಪರಿಹಾರಾರ್ಥವಾಗಿ ಕಾವೇರಿತೀರಕ್ಕೆ ಹೋಗಿ ತಪಸ್ಸು ಮಾಡುತ್ತಿದ್ದನು.

ಜಯಸಿಂಹನು ರಾಜ್ಯವನ್ನು ತೊರೆದು ತಪಸ್ಸಿಗೆ ತೆರಳಿದ ಸಂಗತಿಯನ್ನು ತಿಳಿದು ಪಟ್ಟದ ಮೊಗರಿನ "ಮೊಗರಾಖ್ಯ"ನೆಂಬ ಹೊಲೆಯ ಅರಸನೂ ಈತನ ಬಾವನೂ ಸೈನ್ಯಾಧಿಪತಿಯೂ ಆದ ಬಡಜೆಯ "ಬಡಬ"ನೆಂಬ ಸೈನ್ಯಾಧಿಪತಿಯೂ ಒಟ್ಟುಗೂಡಿ ಬಂದು, ಕಾಮದೇವನು ಅಗ್ರಹಾರಗಳನ್ನು ಕಟ್ಟಿಸಿಕೊಟ್ಟು ರಕ್ಷಿಸುತ್ತಿದ್ದ ಬ್ರಾಹ್ಮಣರನ್ನು ಪೀಡಿಸತೊಡಗಿದರು. ಇವರ ಉಪಟಳವನ್ನು ಸಹಿಸಲಾರದೆ ಬ್ರಾಹ್ಮಣರು ತಪಸ್ಸಿನಲ್ಲಿದ್ದ ತಮ್ಮ ರಾಜ

ನಾದ ಜಯಸಿಂಹನಿಗೆ ಮೊರೆಯಿಡಲು, ಬ್ರಾಹ್ಮಣರ ಕಷ್ಟವನ್ನು ಪರಿಹರಿಸುವುದು ತಪಸ್ಸಿಗಿಂತಲೂ ಮೇಲಾದುದು ಎಂದು ತಿಳಿದು ತಪಸ್ಸನ್ನು ಬಿಟ್ಟು ರಾಜ್ಯಕ್ಕೆ ಬಂದು ಸೈನ್ಯಸಮೇತನಾಗಿ ಆ ದುಷ್ಟರನ್ನು ಸೋಲಿಸಿ, ರಾಜ್ಯವನ್ನು ಸ್ವಾಧೀನಪಡಿಸಿಕೊಂಡನು. ಅನಂತರ ತನ್ನ ತಮ್ಮನಾದ "ವೀರವರ್ಮ"ನಿಗೆ ಪಾಮಂಜೂರಿನಲ್ಲಿ ಪಟ್ಟಕಟ್ಟಿ ಆ ಪ್ರಾಂತ್ಯದ ಕೆಲವು ಸೀಮೆಗಳನ್ನು ಅವನಿಗೆ ಬಿಟ್ಟುಕೊಟ್ಟನು.

ತಪಸ್ಸನ್ನು ಬಿಟ್ಟು ರಾಜ್ಯಭಾರವಮಾಡುತ್ತಿದ್ದ ಜಯಸಿಂಹನಿಗೆ ಪುನಃ ಜ್ಞಾನಾರ್ಜನೆಯಲ್ಲಿ ಮನಸ್ಸುಂಟಾಯಿತು. ಆ ಕಾಲದಲ್ಲಿ ದ್ವೈತಮತ ಸ್ಥಾಪಕರೂ ಮಹಾಜ್ಞಾನಿಗಳೂ ಆದ ಉಡುಪಿಯ ಮಧ್ಯಗೇಹ ಭಟ್ಟರ ಪುತ್ರರಾದ ಮಧ್ವಾಚಾರ್ಯರನ್ನು ವಿಷ್ಣುಮಂಗಲಕ್ಕೆ ಆಮಂತ್ರಿಸಿಕೊಂಡನು. ಮಧ್ವಾಚಾರ್ಯರನ್ನು ವಾಗ್ವಾದದಲ್ಲಿ ಸೋಲಿಸಬೇಕೆಂದು ಕಾಯುತ್ತಿದ್ದ ಕಾವುಗೋಳಿಯ ಪ್ರಸಿದ್ಧ ಅದ್ವೈತಿಯಾದ ತ್ರಿವಿಕ್ರಮ ಪಂಡಿತಾಚಾರ್ಯನಿಗೂ ಮಧ್ವಾಚಾರ್ಯರಿಗೂ ರಾಜಸಮ್ಮುಖದಲ್ಲಿ 8 ದಿನಗಳ ವರೆಗೆ ಪ್ರಚಂಡ ವಾಗ್ವಾದ ನಡೆದು, ಅದ್ವೈತಿಯಾದ ತ್ರಿವಿಕ್ರಮ ಪಂಡಿತನು ಸೋತುದಲ್ಲದೆ, ದ್ವೈತವೇ ಶ್ರೇಷ್ಠವೆಂದು ಮನವರಿತು, ದ್ವೈತಮತವನ್ನು ಅವಲಂಬಿಸಿದನು. ರಾಜನೂ ಮಧ್ವಾಚಾರ್ಯರ ಶಿಷ್ಯನಾದನು. ಹೀಗೆ ಮಧ್ವಾಚಾರ್ಯರೂ ತ್ರಿವಿಕ್ರಮ ಪಂಡಿತನೂ ಕೂಡಿ ವಾಗ್ವಾದನಡಿಸಿದ ಸ್ಥಳಕ್ಕೆ ಅದ್ಯಾಪಿ 'ಕೂಡಲು' ಎಂಬ ಹೆಸರಿದೆ. ಜಯಸಿಂಹನು ಅಂದಿನಿಂದ ಜ್ಞಾನಾರ್ಜನೆ ಮಾಡುತ್ತಾ, ಅನೇಕ ಕಾವ್ಯಗಳನ್ನು ರಚಿಸಿ, 'ಕವಿಸಿಂಹ'ನೆಂಬ ಬಿರುದಾಂಕಿತನಾಗಿ ಮೆರೆಯುತ್ತಿದ್ದನು.

— ಸಂಪೂರ್ಣ —

(ದಿವಂಗತ ಪೈಪಾಡಿ ವೆಂಕಟರಮಣಯ್ಯನವರು ಬರೆದಿಟ್ಟ "ಜಯಸಿಂಹನ ಚರಿತೆ"ಯನ್ನು ಇಲ್ಲಿ ಸಂಕಲಿಸಿದ್ದೇವೆ. ಈ ಕತೆಯನ್ನು ಯಕ್ಷಗಾನ ರೂಪದಲ್ಲಿ ಕೃತಿಯಾಗಿಸಿದುದನ್ನೂ ಇಲ್ಲಿ ಜತೆಗೊಳಿಸಿದ್ದೇವೆ.)



# ಜಯಸಿಂಹ ವಿಜಯ
## (ಯಕ್ಷಗಾನ ಕೃತಿ)

|| ರಾಗ ನಾಟಿ—ಝಂಪೆ ತಾಳ ||

ಜಯ ಕರ್ಣಾಟಕ ಮಾತೆ । ಜಯ ಮನೋಹರೆ ಪ್ರೀತೆ ।
ಜಯ ವೀರಜನ ಖ್ಯಾತೆ । ಜಯ ನಿನಗೆ ದಾತೆ || ೧ ||

ಪರಶುರಾಮನ ಗೋತ್ರೆ । ಸರುವ ಜನನುತಿಪಾತ್ರೆ ।
ಶರಣರಿಂಗತಿ ಮಿತ್ರೆ । ಪರಮ ಸುಚರಿತ್ರೆ || ೨ ||

ಚಾಳುಕ್ಯ ಕಾದಂಬ । ರಾಳಿಕೆಯ ಜಯಸ್ತಂಭ ।
ಮೇಲಾಗಿ ಮೆರೆಯಿಸಿದೆ । ಶೀಲೆ ಸಮ್ಮುದದೆ || ೩ ||

ಆಲೂಪ ಹೊಯಿಸಳರ । ವೀರಗುಣ ಚಾರುತರ ।
ದಾಳಿಕೆಯ ಮಾಡಿಸಿದೆ । ಸುಖವ ತೋರಿಸಿದೆ || ೪ ||

ಮಧ್ವ ಮೊದಲಾದ ಯತಿ । ವರರಿಂದ ಲೋಕಕತಿ ।
ವೃದ್ಧಿಯನು ಮಾಡಿಸಿದೆ । ಮತವ ಬೆಳಗಿಸಿದೆ || ೫ ||

ಕ್ರೀಡಿಸುವೆ ಜಲಧಿಯಲಿ । ಕೂಡುತಿಹ ನದಿಗಳಲಿ
ಹಾಡುತಿಹೆ ಗಿರಿಗಳಲಿ ಜ್ಞಾನ ಬೀರುತಲಿ || ೬ ||

ಶಿರ ಬಾಗುವೆನು ತಾಯೆ । ಕರುಣದಿಂದಲಿ ಕಾಯೆ ।
ವರಜನ್ಮ ಭೂಜನನಿ । ಪರಮ ಕಲ್ಯಾಣಿ || ೭ ||

|| ವಾರ್ಧಿಕ್ಯ ||

ತುಳುನಾಡ ಮಾತೆಗಾನತನಾಗಿ ವಿನಯದಿಂ ।
ತಲೆವಾಗಿ ದೇವ ಗುರುಹಿರಿಯರಿಗೆ ನಮಿಸಿ ಕವಿ ।
ಗಳ ಚರಣಗಳಿಗೆರಗಿ ಮಗು ತಾಯ ಬಳಿಗೈದಿ ಕಥೆಯನ್ನು ಪೇಳುವಂತೆ ||

ಬಲು ಬುದ್ಧಿಯುತರ ಸಭೆಯೊಳಗಿಂದು ಕೈಮುಗಿದು ।
ತಿಳುವಳಿಕೆಯಿಲ್ಲದ ನಾನೊರೆವೆ ಭಕುತಿಯಲಿ ।
ನೆಲದೊಡೆಯ ಜಯಸಿಂಹ ಚರಿತೆಯನು ಕರಿನಾಡ ದೇಶದಭಿಮಾನದಿಂದ
॥ ೮ ॥

॥ ರಾಗ ಸೌರಾಷ್ಟ್ರ—ತ್ರಿವಡೆ ತಾಳ ॥

ಪೇಳುತಿರೆ ಬಾಲಕರಿಗಿದ್ದುದ । ಶಾಲೆಯಲಿ ಕರ್ಣಾಟ ಚರಿತೆಯ ।
ಕೇಳಿ ಪ್ರಶ್ನೆಯ ಮಾಡತೊಡಗಿದ । ಬಾಲನೋರ್ವ ॥ ೯ ॥
ವೀರವರ ಜಯಸಿಂಹ ರಾಜನು । ಭೂರಿ ತೋಷದಿ ರಾಜ್ಯವಾಳಿದ ।
ಚಾರು ಕತೆಯನು ಪೇಳಿರೆನಗೆ ವಿ । ಸ್ತಾರವಾಗಿ ॥ ೧೦ ॥

ತರಳನೀ ಪರಿ ಪೇಳೆ ಬೋಧಕ । ಭರದಿ ಭೂಪತ ತಂದು ಪ್ರೇಮದಿ ।
ಕರಿಯನಾಡಿನ ಸೊಬಗ ತೋರುತ । ಲೊರೆದನಿಂತು ॥ ೧೧ ॥

॥ ರಾಗ—ತಾಳ ॥

ಬಾಲಕನೆ ಲಾಲಿಸಿತ್ತಾ । ಲೀಲೆಯಿಂದ ಪೇಳ್ವೆ ನಾನು ।
ಶೀಲ ಜಯಸಿಂಹ ರಾಜ । ನಾಳುವಿಕೆಯ ॥ ೧೨ ॥

ಬೋಧಕನೀ ತೆರದಿ ಕಥೆಯ । ನಾದಿಯಿಂದ ವರ್ಣಿಸುತ್ತ ।
ಬೋಧಿಸಿದ ಬಾಲಕಂಗೆ । ಮೋದದಿಂದಲೆ ॥ ೧೩ ॥

॥ ಭಾಮಿನಿ ॥

ಧರೆಯೊಳುತ್ತಮವೆನಿಪ ಹಂಗಳ ।
ಪುರದೊಡೆಯನೆಂದೆನಿಸಿ ಮಧುಕೇ ।
ಶ್ವರ ಭಜಕನಾಗಿಹ ಕದಂಬಾನ್ವಯದಿ ಜನಿಸಿರುವ ॥
ಧರಣಿಪತಿ ವರ ಕಾಮದೇವನು ।
ಕರೆಸಿ ತನ್ನಯ ಸಚಿವಮುಖ್ಯರ ।
ಹರುಷದಿಂದಿಂತೆಂದ ತನ್ನಯ ಮನದ ಸಂಗತಿಯ ॥ ೧೪ ॥

॥ ರಾಗ ತೋಡಿ—ಅಷ್ಟತಾಳ ॥

ವರ ಸಚಿವನೆ ಕೇಳು ಮಾತ । ಮನ ।
ದಿರವ ಪೇಳುವೆನು ಪ್ರಖ್ಯಾತ ॥

ಧರೆಯೊಳಗಿಹ ಪುಣ್ಯ । ಕರ ತೀರ್ಥಯಾತ್ರೆಯು ।
ಹರುಷದಿ ಮಾಡಲು । ಪೊರಡಬೇಕೆಂದಿಹೆ ॥ ೧೫ ॥

ಪುತ್ರಿ ಸುಶೀಲೆಯು ಕೂಡಿ । ಪುಣ್ಯ ।
ಕ್ಷೇತ್ರ ದರ್ಶನಗಳ ಮಾಡಿ ॥
ಸುತ್ತಿ ದಕ್ಷಿಣ ಕಡೆ । ಯಾತ್ರೆಯು ಮಾಡುತ್ತ ।
ತೀರ್ಥಸ್ನಾನದಿ ಕೃತ । ಕೃತ್ಯನಾಗಲು ಮನ ॥ ೧೬ ॥

ಬರುವ ವರೆಗೆ ನೀನು ಧರೆಯು । ಎನ್ನ ।
ತೆರದಿಂದ ಪಾಲಿಸು ಪ್ರಜೆಯು ॥
ಕರಕರೆಗೊಳಿಸದೆ ದುರುಳರುಪದ್ರವ ।
ಪರಿಹರಿಸುತಲಾಳು । ತಿರುವುದು ಸೌಖ್ಯದಿ ॥ ೧೭ ॥

॥ ಭಾಮಿನಿ ॥

ಎಂದು ಸಚಿವಗೆ ತಿಳಿಸುತತಿ ಮುದ ।
ದಿಂದ ಸತಿಸುತೆಯರನು ಕೂಡುತ ।
ಬಂದು ಪುಣ್ಯಕ್ಷೇತ್ರದರುಶನ ಮಾಡಿ ತೀರ್ಥದಲಿ ॥
ಮಿಂದುಕೊಳ್ಳುತ ತುಳುವನಾಡಿನೊ ।
ಳೊಂದು ಭಾಗದಿ ಮೆರೆವ ಕುಂಬಳೆ ।
ಯೊಂದು ಕರೆಯುವ ಸೀಮೆಗೈತಂದಲ್ಲಿ ನಿಲುತಂದು ॥ ೧೮ ॥

। ರಾಗ—ಝಂಪೆ ॥

ಕಾಮದೇವನು ತನ್ನ । ಕಾಮಿನಿಯೊಡಗೊಂಡು ।
ಪ್ರೇಮ ಸುತೆಯುಳ ಸಹಿತ । ತಾ ಮಣಿದು ಧರೆಗೆ ॥ ೧೯ ॥

ತೀರ್ಥಗಳ ಮಿಂದು ಬಹ । ಳರ್ತಿಯೊಳು ಸಂಚರಿಸಿ ।
ಸುತ್ತಿಬರೆ ಕಂಡನೊಂ । ದುತ್ತಮದ ಹೊಳೆಯು ॥ ೨೦ ॥

ಬಂದು ನದಿಯೆಡೆಗೆಯಾ । ನಂದದಲಿ ನೃಪ ತನ್ನ ।
ನಂದನೆಯು ಕರದೆಂದ । ನಿಂದು ನೋಡೆನುತ ॥ ೨೧ ॥

|| ದ್ವಿಪದಿ ||

ಮುಗಳೆ ಕಾಣೌ ಮುಂದೆ ಹರಿಯುತಿಹ ಹೊಳೆಯು |
ನಗೆಮೊಗವ ಹೋಲುತಿಹ ಹೂವ ಪರಿಮಳವ || ೨೨ ||

ತಿಳಿನೀರು ತನ್ನಡಿಯ ಮರಳ ತೋರಿಸುತ |
ತಿಳಿಸುವುದು ತನ್ನೊಡಲ ಜನರ ಮೆಚ್ಚಿಸುತ || ೨೩ ||

ಭಾವಿಸಲು ಯಾತ್ರಿಕರ ವಿಶ್ರಾಂತಿಗೆನುತ |
ದೇವನಿದ ನಿರ್ಮಿಸಿದನೆಂಬದದು ಖಚಿತ || ೨೪ ||

(ವಚನ—ಆಗಲಾ ಸುಶೀಲೆ ಬಿನ್ನವಿಸಿದುದೆಂತೆಂದರೆ—)

|| ರಾಗ ಸೌರಾಷ್ಟ್ರ—ಅಷ್ಟತಾಳ ||

ತಂದೆ ನೀ ಲಾಲಿಪುದೆನ್ನಯ ಮಾತಿನ |
ಕುಂದುಗಳನೆ ತಿದ್ದುತ ||
ಮುಂದಣ ನದಿಯೊಳು ಮಿಂದು ಬರಲು ಮನ |
ವಿಂದಪೇಕ್ಷಿಪುದು ತಾತ || ೨೫ ||

ನಂದನೆಯಾಡಿದಾನಂದದ ವಚನವ |
ನಂದು ಲಾಲಿಸುತಾತನು ||
ಮಂದಗಮನೆ ಬೇಗ ಮಿಂದು ಬಾರೆನೆ ತೋಷ |
ದಿಂದಲಿ ಪೊರಟು ತಾನು || ೨೬ ||

|| ಭಾಮಿನಿ ||

ತಂದೆಯಾಡಿದ ಮಾತ ಕೇಳುತ |
ಲಂದು ಸಖಿಯರ ನೆರಸಿ ಬಾಲಕಿ |
ಬಂದು ನದಿಯೊಳಗಿಳಿಯೆ ಬಾಲೆಯು ಮುಗುಚಿದಂದದಲಿ ||
ಸಂದು ಮೂರ್ಛಿತಳಾಗೆ ಸಖಿಯರ |
ವೃಂದ ಗೋಳಿಡೆ ಕೇಳಿ ನೃಪನೈ |
ತಂದು ಬಾಲೆಯ ಕರೆದು ಮರುಗಿದನಾಗ ಬಾಯ್ಬಿಡುತ || ೨೭ ||

॥ ರಾಗ ಕಾಂಬೋಧಿ—ಏಕತಾಳ ॥

ಮಾತೆನಾಡೆಯೆನ್ನೊಳೊಂದು । ಮುದ್ದು ಬಾಲೆ ॥ ಎನ್ನ ।
ಪ್ರೀತಿಯಿಂದ ಕರೆಯೆ ಬಂದು । ಮುದ್ದು ಬಾಲೆ ॥ ೨೮ ॥

ಕಣ್ಣು ಬಿಟ್ಟು ನೋಡೆಯಮ್ಮ । ಮುದ್ದು ಬಾಲೆ ॥ ನಿನ್ನ ।
ಬಣ್ಣವೇನು ಕುಂದಿತಮ್ಮ । ಮುದ್ದು ಬಾಲೆ ॥ ೨೯ ॥

ಉಸಿರು ಕೂಡ ನಿಂತುದೇನೌ । ಮುದ್ದು ಬಾಲೆ ॥ ಹಾಳು ।
ವಿಷದ ಜಂತು ಕಚ್ಚಿತೇನೌ । ಮುದ್ದು ಬಾಲೆ ॥ ೩೦ ॥

ತರಳೆ ನಿನ್ನ ನದಿಯ ತಡಿಗೆ । ಮುದ್ದು ಬಾಲೆ ॥ ಇಂದು ।
ಕರೆದುತಂದು ಕೊಂದೆನಯ್ಯೊ । ಮುದ್ದು ಬಾಲೆ ॥ ೩೧ ॥

॥ ಭಾಮಿನಿ ॥

ಅರಸನೀಪರಿ ಚಿಂತೆಮಾಡುತ ।
ಲಿರಲು ಸ್ನಾನಕೆ ಬಂದಿರುವ ಭೂ ।
ಸುರನು ರಾಜನ ಮಗಳ ಮೂರ್ಛೆಯನರಿತು ಮನದೊಳಗೆ ॥
ತರಳೆ ಮೃತಿಯನು ಪೊಂದಲಿಲ್ಲವು ।
ದುರುಳ ಯಕ್ಷನು ಘಾತಿಸಿರುವನು ।
ದೊರೆಗೆ ನಾನಿದನರುಹಿ ಬದುಕಿಪೆನೆನುತಲೈತಂದ ॥ ೩೨ ॥

॥ ರಾಗ—ತ್ರಿವುಡೆ ತಾಳ ॥

ಏತಕೆ ಚಿಂತೆಯ ಮಾಡುವೆ ನೀನು ।
ಭೂತಳೇಶನೆ ಕೇಳು ಪೇಳುವೆ ನಾನು ॥ ಪಲ್ಲವಿ ॥

ಬಾಲೆಯು ಮರಣವ ತಾಳಿದುದಿಲ್ಲ ।
ಪೇಳುವೆ ಬಂದಿಹ ಕಾರಣವೆಲ್ಲ ॥ [redacted] ॥

ಯಕ್ಷನ ಮಾಟದಿ ಬಿದ್ದಿಹಳೀಕೆ ।
ರಕ್ಷಣೆಗಾನಿರೆ ಬೆದರುವದೇಕೆ ॥ ೩೪ ॥

ಮಂತ್ರಿಸುತೀಕೆಗೆ ಜಲವನು ಚೆಲ್ಲೆ ।
ತಂತ್ರದೊಳೀಕೆಯ ಬದುಕಿಪೆನಿಲ್ಲೆ ॥ [redacted] ॥

॥ ಕಂದ ॥

ಜಲಂ ಮಂತ್ರಿಸಿ ಬ್ರಾಹ್ಮಣ ।
ತಳಿಯಲ್ ಕಂಗಳ ತೆರೆಯುತ ಬಾಲಕಿ ನಿದ್ರೆಯು ॥
ಕಳೆದೇಳುವ ಪರಿಯೆಚ್ಚರ ।
ಗೊಳೆ ನೃಪ ಮಿಗೆ ತಕ್ಕೈಸುತ ಲಾಕೆಯೊಳೆಂದಂ ॥ ೩೬ ॥

॥ ಸಾಂಗತ್ಯ ॥

ಕೇಳು ಮಗಳೆ ನೀನು ಮೊಯಲಿಕಿಳಿದಿಹ !
ಕಾಲದಿ ಮೂರ್ಛೆಯನಾಂತೆ ॥
ಗೋಳಡುತಲಿ ಬಂದು ಸಖಿಯರು ಪೇಳೆ ನಾ ।
ಬಾಲೆ ಕಂಡಧಿಕ ದುಃಖಿಸಿದೆ ॥ ೩೭ ॥

ನೋಡಿ ನಾವೆಲ್ಲರು ಕೂಡಿ ಬೊಬ್ಬೆಯನಾಗ ।
ಮಾಡಲೀ ಬ್ರಾಹ್ಮಣ ಬಂದು ॥
ಗಾಡನೆ ಮಂತ್ರಿಸಿ ಕೂಡಲೆ ಜಲವನು ।
ಝಾಡಿಸುತುಳಿಸಿದನಿಂದು ॥ ೩೮ ॥

॥ ಭೋಗಷಟ್ಪದಿ ॥

ಎಂದು ಮಾತ ಕೇಳಿ ತರಳೆ । ವಂದಿಸುತ್ತ ಲಜ್ಜೆಯನ್ನು ।
ಹಿಂದೆ ಮಾಡಿಕೊಂಡು ಬಳಿಕ ಮುಂದಗಮನೆಯು ॥
ಬಂದ ಮರಣದಿಂದಲೆನ್ನ । ನಿಂದು ಪೊರೆದ ವಿಪ್ರನೆನಗೆ ।
ಮುಂದೆ ಪ್ರಾಣಕೊಡೆಯನೆಂದು ದೃಢದಿ ನುಡಿದಳು ॥ ೩೯ ॥

॥ ಭಾಮಿನಿಷಟ್ಪದಿ ॥

ತರಳೆಯೊಂದುದ ಕೇಳಿ ರಾಯನು ।
ಕರೆದು ಭೂಸುರನೊಡನೆ ವಿನಯದಿ ।
ಕರವ ಜೋಡಿಸುತೆಂದನೀ ಪರಿ ಸಾವಧಾನದಲಿ ॥ ೪೦ ॥

॥ ರಾಗ ಪಂಚಾಗತಿ—ಮಟ್ಟೆ ತಾಳ ॥

ಪರಮ ಜ್ಞಾನಿವರ್ಯ ನಿನ್ನ ಕರುಣೆಯಿಂದಲಿ ।
ದುರಿತವೆಲ್ಲ ಕರಗಿ ಪೋಗೆ ಹರುಷವಾಯಿತು ॥

ಕಿರಣದಿಂದ ರವಿಯು ತಮವ ತರಿಯುವಂತೆಯೇ ।
ಧರಣಿಸುರನೆ ಕೇಡಿನಿರುಳ ತಂದು ಕೆಡಹಿದೆ ॥ ೪೧ ॥
ಭಳಿರೆ ಭೂಸುರೇಂದ್ರ ನೀನು ತಿಳಿದ ಮಂತ್ರದೆ ।
ಲಲನೆಯಿವಳಿಗೊಲಿದು ಕ್ಷೇಮಗೊಳಿಸಿ ಸಲಹಿದೆ ॥
ಬಲು ಸಮರ್ಥ ದೀನಬಂಧು ಸಲಿಸು ಬಯಕೆಯ ।
ಫಲವ ತೊರೆದು ಮಗಳ ವರಿಸಿ ಗಳಿಸು ಪ್ರೇಮವ ॥ ೪೨ ॥

॥ ಭಾಮಿನಿ ॥

ಧರಣಿದೇವನು ವರಿಸೆ ತರಳೆಯ ।
ನರಸ ಕುಂಬಳೆ ಸೀಮೆ ಮೊದಲಾ ।
ದರಬಿ ಶರಧಿಯ ಪೂರ್ವ ದಿಕ್ಕಿನ ರಾಜ್ಯವೆಲ್ಲವನು ॥
ಭರದಿ ಮಗಳಿಗೆ ಕೊಟ್ಟು ಪ್ರೇಮದಿ ।
ಪರಸಿ ನೀತಿಯ ಪೇಳಿ ತನ್ನಯ ।
ಪುರಕೆ ಪೋದನು ಸತತ ಪ್ರಜೆಗಳ ಕ್ಷೇಮಚಿಂತಕನು ॥ ೪೩ ॥

॥ ವಾರ್ಧಿಕ್ಯ ॥

ಕೆಲಕಾಲ ಕಳೆಯುತಲೆ ರಾಜಸುತೆ ಗರ್ಭದೊಳು ।
ಕುಲತಿಲಕ ಜಯಸಿಂಹನೆಂಬಾತನುದಿಸಲವ ।
ತುಳುನಾಡ ಪಟ್ಟವನು ಪಡೆದು ಯುದ್ಧಕೆ ಬಂದ
ಪಾಂಡ್ಯನನು ಗೆದ್ದು ಬಳಿಕ ॥
ಇಳೆಯನತಿ ತೋಷದಲಿ ಪೊರೆಯುತಿರಲಾ ಸಮಯ ।
ದಲಿ ಬೇಡರೈತಂದು ರಾಯನೊಳು ಕೈಮುಗಿದು ।
ಬಲು ವಿನಯದಲಿ ದುಷ್ಟ ಜಂತುಗಳು ಮಾಡುತಿಹ
ಹಾವಳಿಯನೊರೆದರಿಂತು ॥ ೪೪ ॥

॥ ರಾಗ—ಏಕತಾಳ ॥

ಲಾಲಿಸಿ ಕೇಳೈ ಧಾರಿಣೀಂದ್ರ । ಹೇ ಸದ್ಗುಣ ಸಾಂದ್ರ ॥
ಕಾಡಾನೆ ಕರಡಿ ಕೋಡಗ ಸಿಂಹ । ಬಂದೆಲ್ಲಾ ವನದಿ ।
ಕೇಡಗೊಳಿಪುದೈ ಜಯಸಿಂಹ ॥

ಕಾಡುತ ಪ್ರಜೆಗಳ ನೋಡುತ ಬೆದರಿಸಿ ।
ಓಡಿಸುತಿರುವವು ನೋಡೈ ರಾಜನೆ ॥ ೪೫ ॥

ಚಾಣಾ ಚೂಣಿಯು ಗೈಯುವವಿಂದು । ಕೇಳೈ ಗುಣಸಿಂಧು ।
ಹಾನಿಯು ಪೇಳಲಿನ್ನೇನೆಂದು ॥
ದೀನರ ರಕ್ಷಿಸಿ ಕ್ಷೋಣಿಯು ಪೊರೆಯಲು ।
ಜಾಣನೆ ಪೊರಡೈ ಕಾನನಕಿಂದು ॥ ೪೬ ॥

॥ ಕಂದ ॥

ಚರನಿಂತೆಂದುದ ಕೇಳುತೆ ।
ನರಪಂ ಬೇಟೆಗೆ ಕಿರಾತರೂಡನತಿ ಮುದದಿಂ ।
ಪೊರಟಂ ಶರಣರ ಕಾಯಲ್ ।
ಭರದಿಂದಾಗಲೆ ಪರಿಪರಿ ಶಸ್ತ್ರವಗೊಳುತಂ ॥ ೪೭ ॥

॥ ರಾಗ—ಏಕತಾಳ ॥

ಬಂದಾ ಭೂಪನು ಬೇಟೆಗೆಂದು । ಸದ್ಗುಣಸಿಂಧು ॥ ಪಲ್ಲವಿ ॥

ಮುಂದೆ ಬರುವ ಮೃಗ । ವೃಂದವ ತರಿಯುತ ।
ಲಂದು ಕಿರಾತರ । ಮಂದಿಯು ಕೂಡಿ ॥ ೪೮ ॥

ಘಡ ಘಡ ಮೃಗಗಳ । ಪಿಡಿಪಿಡಿಯೆನುತಲಿ ।
ಕಡಿ ಕಡಿದೊಟ್ಟುತ । ಲಡಿಗಡಿಗಾಗ ॥ ೪೯ ॥

ಮುಂದರಿಸುತ ಬರ । ಲೊಂದೆಡೆಯೊಳು ಪೊದೆ ।
ಯಿಂದ ಪೊರಟ ಘನ । ಹಂದಿಯುನಟ್ಟುತ ॥ ೫೦ ॥

॥ ಭಾಮಿನಿ ॥

ಇಂತು ಹಂದಿಯುನಟ್ಟಿ ಬರೆ ಭೂ ।
ಕಾಂತ ಕೋಪದ ಭರದಿ ತಾ ಗುರಿ ।
ಯಾಂತು ಬಿಡಲಾ ಬಾಣ ಉದ್ದಾಲಕನೆನುವ ಮುನಿಗೆ ॥
ಅಂತ್ಯಗಾಲವಗೊಳಿಸಲಾತನ ।
ಕಾಂತೆ ರಾಯನ ಕಂಡು ಕೋಪಾ ।
ಕ್ರಾಂತಳಾಗಲು ಬೆದರಿ ರಾಜನು ಮರುಗುತಿಂತೆಂದ ॥ ೫೧ ॥

|| ರಾಗ—ಆದಿತಾಳ ||

ಮನಸಾಗೈಯಲಯ್ಯೋ | ಮುನಿಯ ಪ್ರಾಣ |
ಹಾನಿಯಾಗಿ ಹೋಯಿತು || [redacted] ||

ಹಂದಿಯನಟ್ಟಿಕೊಂಡು | ವನಕೆ ನಾನು |
ಬಂದು ಪಾಪಿಯಾದೆನು || ೫೩ ||

ಅರಿಯದೆ ಗೈದೆ ತಾಯೆ | ಎನಗೆ ನೀನು |
ಪರಸಿ ಕಾಯವ್ವಾ ತಾಯೇ || ೫೪ ||

|| ಕಂದ ||

ನರ ನೀನೆನ್ನಯ ಪತಿಯಂ |
ಶರದಿಂ ತರಿದೈ ವನಾಂತರಕೆ ಬಂದೀಗಳ್ ||
ದುರುಳನೆ ನಿನ್ನಯ ರಾಜ್ಯವು |
ಭರದಿಂದಳಿಯಲೆನುತಾ ಪತಿವ್ರತೆ ನುಡಿಗಳ್ || ೫೫ ||

|| ಭಾಮಿನಿ ||

ಈಪರಿಯ ಶಾಪವನು ಮುನಿಪತಿ |
ಭೂಪನಿಗೆ ಕೊಡಲಾತ ಮನದಲಿ |
ತಾಪಗೊಳ್ಳುತ ರಾಜ್ಯದಾಶೆಯ ತೊರೆದು ದುಃಖಿಸುತೆ ||
ಪೋಪೆನೆನುತಲಿ ತಪಕೆ ನಿರ್ಮಲೆ |
ಪಾಪಹರೆ ಕಾವೇರಿ ತೀರದಿ |
ತಾಪಸನ ತೆರದಿಂದಲಿರ್ದನು ಸತತ ಧ್ಯಾನದೊಳು || ೫೬ ||

|| ವಾರ್ಧಿಕ್ಯ ||

ಅರಸನೀಪರಿಯಿಂದ ತಪವನಾಚರಿಸುತಿರೆ |
ಪುರದೊಳಗೆ ದೊರೆಯಿಲ್ಲವೆಂಬುದದ ತಿಳಿಯುತಲೆ |
ದುರುಳ ಮೊಗರಾಖ್ಯನೆನ್ನುವ ಪೊಲೆಯ ತನ್ನಸಖ ಬಡಜನೆಂಬವನ ಕೂಡಿ|
ಭರದಿಂದ ಪಟ್ಟಣವ ಸೂರೆಗೊಳುವುದ ಕಂಡು |
ಪುರವಾಸಿಗಳು ನೊಂದು ನಗರವನು ಶೋಕದಲಿ |
ತೊರೆಯುತ್ತ ತಮ್ಮೊಳಗೆ ಪೇಳಿದರು ಕಷ್ಟಗಳ ಕಣ್ಣೀರು ಸುರಿಸುತಿಂತು||೫೭||

॥ ರಾಗ—ಆದಿತಾಳ ॥

ಯಾರಿಗೆ ಪೇಳ್ವುದಿನ್ನು । ನಮ್ಮಯ ಕಷ್ಟ ।
ಯಾರು ಸಂತೈಸರಿನ್ನು
ಕ್ರೂರನಾಗಿಹ ಬಡಜ । ಬಂದೆಮ್ಮನೆಲ್ಲ ।
ಗಾರುಗೆಡಿಸಿದನೆಲ್ಲ ॥
ಘೋರ ಮೊಗರನು ಮಾಳ್ಪ । ದಾಳಿಯನಿನ್ನು ।
ಸೈರಿಸಮೆಂತು ಜಗದಿ ॥ ೫೮ ॥
ಹಿಂದೆಯಾಳಿದ ದೊರೆಯು ಬಿಟ್ಟೆಮ್ಮನಿಲ್ಲಿ ।
ಕೊಂದನೆಂಬುದೆ ಖರೆಯು ॥
ಮುಂದೆ ಇನ್ನಾದರಾತನ । ಪುಡುಕಿ ಕರ ।
ತಂದು ಮಾಳ್ಪುದೆ ಜತನ ॥ ೫೯ ॥

(ವಚನ—ಅವರೆಲ್ಲಾರು ಕಾಡಿಗೈತಂದು ರಾಜನಲ್ಲಿ ಬಿನ್ನವಿಸಿದರೆಂತೆನೆ—)

॥ ರಾಗ ಕಾಂಬೋಧಿ—ಏಕತಾಳ ॥

ದುರುಳ ಮೊಗರಾಖ್ಯನೆಮ್ಮ । ರಾಯ ಕೇಳು ॥ ಬಂದು ।
ಪುರವ ಸೂರೆಗೊಂಡನಯ್ಯೊ । ರಾಯ ಕೇಳು ॥ ೬೦ ॥
ಹಿಡಿದು ಬಡಿದು ಬಂಡುಗೈದ । ರಾಯ ಕೇಳು ॥ ದುಷ್ಟ ।
ಬಡಜನೆಂಬ ಪೊಲೆಯನಯ್ಯೊ । ರಾಯ ಕೇಳು ॥ ೬೧ ॥
ಪರಮಕರುಣಿ ದೀನ ಬಂಧು । ರಾಯ ಕೇಳು ॥ ಬೇಗ ।
ಪುರಕೆ ಬಂದು ಕಾಯೊ ನಮ್ಮ । ರಾಯ ಕೇಳು ॥ ೬೨ ॥

॥ ರಾಗ ಭೈರವಿ—ಏಕ ತಾಳ ॥

ಜನರಿಂತೆಂದುದ ಕೇಳಿ । ತಾ । ಮನದಲಿ ಕೋಪವ ತಾಳಿ ॥
ಜನಪನು ಧ್ಯಾನವ ಬಿಟ್ಟು । ಬಲು । ಘನತರದಸ್ತ್ರವ ತೊಟ್ಟು ॥೬೩॥
ಪುರವನು ಸೇರುತಲಾಗ । ನೃಪ । ದುರುಳರ ಕರೆಯುತ ಬೇಗ ॥
ಭರದಿಂ ಸಾರುತಲವರ । ಬಲು । ಜರೆದನು ಘನ ಹಿಂಸಕರ ॥೬೪॥
ಎಲೆ ಮೊಗರಾಖ್ಯನೆ ಕೇಳು । ನೀ । ನಿಳೆಯನು ಮಾಡಿದೆ ಹಾಳು ॥
ಬಲುಬಲನೆಂದೆನುತಿರುವ । ಖಳ । ನಿಳಿಸುವೆ ನಿನ್ನಯ ಗರ್ವ ॥೬೫॥

ಇಂತೆನುತಲಿ ಜಯಸಿಂಹ । ರಿಪು । ದಂತಿಯ ಸೀಳುವ ಸಿಂಹ ॥
ದಂತಾಗುತಲಾಕ್ಷಣದಿ । ನೃಪ । ನಂತಕನಾದನು ರಣದಿ ॥ ೬೬ ॥

॥ ರಾಗ ಮಾರವಿ—ಏಕತಾಳ ॥

ಬಿಡು ಬಿಡು ನಿನ್ನಯ ಶೌರ್ಯದ ಮಾತಿಗೆ ।
ಬೆದರೆನು ನಾ ಕೇಳು ॥
ಸುಡು ಸುಡು ನಿನ್ನಯ ಪೌರುಷವೆಲ್ಲವ ।
ನಿಳಿಸುವೆ ನೀ ತಾಳು ॥ ೬೭ ॥

ಮಜ ಮಜ ಪೂತುರೆ ಮೆಚ್ಚಿದೆನೆನುತಲಿ ।
ಧರಣಿಪ ಶರಬಿಡಲು ॥
ಕುಜನ ಕುಲಾಗ್ರಣಿ ಬಡಜನು ಬಿದ್ದನು ।
ಜನರತಿ ಘೇಯೆನಲು ॥ ೬೮ ॥

ಬಡಜನು ಬೀಳ್ವುದ ಕಾಣುತಲವ ಖ ।
ಡ್ಗವ ಕೈಯೊಳು ಕೊಂಡು ॥
ನಡೆದನು ಮುಂದಕೆ ರಣಕಾ ಕ್ಷಣದಲಿ ।
ಕೆಡುಕನು ಮೊಗರಾಖ್ಯ ॥ ೬೯ ॥

ಬರುತಿಹ ಧೂರ್ತನ ಕಾಣುತ ನೃಪ ಕರ ।
ದೊಳು ಬಾಣವಗೊಂಡು ॥
ಶರಗಳ ಮಳೆಯನು ಕರೆಯುತ ಖಳರನು ।
ಪುರದಿಂದಟ್ಟಿದನು ॥ ೭೦ ॥

॥ ಭಾಮಿನಿ ॥

ಅರಸನೀಪರಿ ದುಷ್ಟರನು ಸಂ ।
ಹರಿಸಿ ಲೋಕಕೆ ಸುಖವಗೊಳಿಸುತ ।
ಪುರಕೆ ಬಿಜಯಂಗೈದು ಸಂತಸದಿಂದ ಪ್ರಜೆಗಳನು ॥
ಕರೆದು ಮನ್ನಿಸಿ ಮಾತೆ ಮಕ್ಕಳ ।
ಪೊರೆಯುವಂದದಿ ರಾಜ್ಯವಾಳಲು ।
ಪುರದ ಜನರತಿ ತೋಷದಲಿ ಹಾಡಿದರು ಮಂಗಲವ ॥ ೭೧ ॥

॥ ಮಂಗಲ ॥

ಮಂಗಲಂ ಜಯ ಮಂಗಲಂ ।
ಮಂಗಲಂ ಜಯ ಮಂಗಲಂ ॥ ಪಲ್ಲವಿ ॥

ಮಿರುಗುವ ತುಳುವಿನ ತೇಜಳಿಗೆ ।
ಹರುಷದಿ ಪ್ರಜೆಗಳ ಪೊರೆವಳಿಗೆ ॥
ಧರಣಿಯ ಸಿರಿಮೊಗದಂದದಿ ಶೋಭಿಪ ।
ಕರಿಯನಾಡಿಗೆ ಜನ್ಮಧಾರಿಣಿಗೆ ॥ ೭೨ ॥

ಕೊಡಲಿಯ ರಾಮನ ಪ್ರೇಮಳಿಗೆ ।
ಕಡುಗಲಿ ವೀರರ ಪಡೆದಳಿಗೆ ॥
ಸಡಗರದಿಂದಲಿ ಲೋಕಕೆ ಧರ್ಮದ ।
ನುಡಿಯ ಸಾರಿದ ಜ್ಞಾನ ಮೂರುತಿಗೆ ॥ ೭೩ ॥

ಗಿರಿವನ ಖಗಮೃಗ ಧಾಮಳಿಗೆ ।
ಸುರುಚಿರ ಸುಂದರ ರೂಪಳಿಗೆ ॥
ಪರಿ ಪರಿ ಪಾವನ ಲೀಲೆಗಳಿಂದಲಿ ।
ಮೆರೆಯುವ ಕನ್ನಡ ಭಾರತಿಗೆ ॥ ೭೪ ॥

(ಇಲ್ಲಿಗೆ 'ಜಯಸಿಂಹ ವಿಜಯ' ಅಥವಾ 'ಜಯಸಿಂಹ ಚರಿತ್ರೆ'ಯೆಂಬ ಯಕ್ಷಗಾನ ಕೃತಿ ಮುಗಿದುದು.)



ಕುಡ್ಪಿ ವಾಸುದೇವ ಶೆಣೈ ಇವರಿಂದ ಪ್ರಭಾತ ಪ್ರಿಂಟರ್ಸ್ ಲಿಮಿಟೆಡ್ ಮಂಗಳೂರು ಇಲ್ಲಿ ಮುದ್ರಿಸಿ, ಪ್ರಕಟಿಸಲ್ಪಟ್ಟಿತು. ಸಂಪಾದಕ: ಕುಡ್ಪಿ ವಾಸುದೇವ ಶೆಣೈ.

Edited, Printed & Published by K. V. Shenoy
at the Prabhat Printers, Ltd., Mangalore